# ಕರ್ನಾಟಕ ವಿಧಾನ ಪರಿಷತ್ತು

1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 500

2. ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ ಎನ್ ಅಪ್ಪಾಜಿಗೌಡ

3. ಉತ್ತರಿಸಬೇಕಾದ ದಿನಾಂಕ : 24–09–2020

4. ಉತ್ತರಿಸಬೇಕಾದ ಸಚಿವರು : ಮಾನ್ಯ ಸಣ್ಣ ನೀರಾವರಿ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | 2018-19ನೇ ಸಾಲಿನಿಂದ 2020-21 ನೇ ಸಾಲಿನವರೆಗೆ ಮಂಡ್ಯ ಜಿಲ್ಲೆ ವ್ಯಾಪ್ತಿಯಲ್ಲಿ ಸಣ್ಣ ನೀರಾವರಿ ಇಲಾಖೆವತಿಯಿಂದ ಮಂಜೂರಾದ ಕಾಮಗಾರಿಗಳಾವುವು: (ತಾಲ್ಲೂಕವಾರು ಅಂದಾಜುಪಟ್ಟಿ ಸಹಿತ ಮಾಹಿತಿ ನೀಡುವುದು) | ಮಂಡ್ಯ ಜಿಲ್ಲೆ ವ್ಯಾಪ್ತಿಯಲ್ಲಿ 2018-19 ನೇ ಸಾಲಿನಿಂದ 2020-21 ನೇ ಸಾಲಿನವರೆಗೆ ವಿವಿಧ ಲೆಕ್ಕ ಶೀರ್ಷಿಕೆವಾರು ಮಂಜೂರಾದ ಕಾಮಗಾರಿಗಳ ವರ್ಷವಾರು ವಿವರಗಳು ಈ ಕೆಳಕಂಡಂತಿದೆ; |
| ಆ | ಮಂಜೂರಾದ ಕಾಮಗಾರಿಗಳಲ್ಲಿ ಈವರೆವಿಗೂ ಉದ್ಘಾಟನೆ ಮಾಡಿ ಪ್ರಾರಂಭ ಮಾಡಿರುವ ಕಾಮಗಾರಿಗಳು ಯಾವುವು:(ತಾಲ್ಲೂಕುವಾರು ಪ್ರತ್ಯೇಕವಾಗಿ ವಿವರವನ್ನು ನೀಡುವುದು) | ಮೇಲ್ಕಂಡ ಕಾಮಗಾರಿಗಳನ್ನು ಉದ್ಘಾಟನೆ ಮಾಡಿ ಪ್ರಾರಂಭಿಸಲಾಗಿದೆ. ತಾಲ್ಲೂಕುವಾರು ವಿವರವನ್ನು ಅನುಬಂಧ ದಲ್ಲಿ ನೀಡಲಾಗಿದೆ. |
| ಇ | ನಾಗಮಂಗಲ ತಾಲ್ಲೂಕು ಹೊನಕೆರೆ ಹೋಬಳಿ ಶ್ಯಾನುಭೋಗನಹಳ್ಳಿ ವ್ಯಾಪ್ತಿಯಲ್ಲಿ ಕಲ್ಲುಕೊರೆ ಸಮೀಪ ಸುಮಾರು 100.00ಲಕ್ಷ ಅಂದಾಜಿನಲ್ಲಿ ಚೆಕ್ ಡ್ಯಾಂ ನಿರ್ಮಾಣ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೌದು |

| ಕ್ರಸಂ | ವರ್ಷ | ಮಂಜೂರಾದ ಒಟ್ಟು ಕಾಮಗಾರಿಗಳ ಸಂ. | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|---|
| 1 | 2018–19 | 586 | 60537.3 |
| 2 | 2019–20 | 62 | 13956.00 |
| 3 | 2020–21 | 4 | 26921.25 |
| | ಒಟ್ಟು | **652** | **101414.55** |

| | | |
|---|---|---|
| ಈ | ಪ್ರಸುತ್ತ ಚಾಲ್ತಿಯಲ್ಲಿರುವ ಕಲ್ಲುಕೊರೆ ಹತ್ತಿರದಲ್ಲಿಯೇ ಚೆಕ್ ಡ್ಯಾಂ ನಿರ್ಮಾಣ ಮಾಡುತ್ತಿರುವುದರಿಂದ ಚೆಕ್ ಡ್ಯಾಂ ಗೆ ಹಾನಿಯಾಗುವುದಿಲ್ಲವೆ: ಈ ಸಂಬಂಧ ಕಾಮಗಾರಿಗೆ ಸ್ಥಳ ಆಯ್ಕೆ ಮಾಡುವಾಗ ಕಲ್ಲುಕೊರೆ ಪಕ್ಕದಲ್ಲಿಯೇ ಸ್ಥಳ ಆಯ್ಕೆ ಮಾಡಿರುವ ಅಧಿಕಾರಿಗಳ ವಿರುದ್ಧ ಸರ್ಕಾರ ತೆಗೆದುಕೊಂಡ ಕ್ರಮಗಳೇನು? (ವಿವರ ನೀಡುವುದು) | ನಾಗಮಂಗಲ ಕ್ಷೇತ್ರದ ಮಾನ್ಯ ಶಾಸಕರು ಎ.ಶ್ಯಾನುಭೋಗನಹಳ್ಳಿ ಮತ್ತು ಬಂಕಾಪುರ-ಪಡುವಲ ಪಟ್ಟಣ ಗ್ರಾಮಗಳ ಸಾರ್ವಜನಿಕರಿಗೆ ಹಾಗೂ ಜಾನುವಾರುಗಳಿಗೆ ನೀರಿನ ಕೊರತೆ ಇರುವುದರಿಂದ ಮಾನ್ಯ ಶಾಸಕರು ಸ.ನಂ18 ರಲ್ಲಿ ಇರುವ ಹಳ್ಳಕ್ಕೆ ಚೆಕ್ ಡ್ಯಾಂ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಶಿಫಾರಸ್ಸಿನೊಂದಿಗೆ ಸೂಚಿಸಿರುವ ಮೇರೆಗೆ 2017-18ರ ಸಾಲಿನಲ್ಲಿ ಅನುಮೋದನೆ ಪಡೆಯಲಾಗಿರುತ್ತದೆ. ಕಾಮಗಾರಿಯ ಅಂದಾಜು ಪಟ್ಟಿಗೆ ತಾಂತ್ರಿಕ ಮಂಜೂರಾತಿ ಸಂಖ್ಯೆ 116/2017-18 ರಲ್ಲಿ ಮಂಜೂರಾಗಿರುತ್ತದೆ. ಪ್ರಸ್ತಾಪಿತ ಕಾಮಗಾರಿಯ ಸಮೀಪದಲ್ಲಿರುವ ಕಲ್ಲು ಕ್ವಾರಿ ಮತ್ತು ಕ್ರಷರ್ ನಿಂದ ಉದ್ದೇಶಿಸಲಾಗಿರುವ ಚೆಕ್ ಡ್ಯಾಂನಲ್ಲಿ ಶೇಖರಣೆಯಾಗುವ ನೀರು ಕಲುಷಿತವಾಗುತ್ತದೆ ಎಂದು ಈ ಕ್ವಾರಿ ಮತ್ತು ಕ್ರಷರ್‌ಗಳ ಚಾಲನೆಗೆ ಅನುಮತಿಯನ್ನು ನೀಡಬಾರದೆಂದು ಕೋರಿ ಪರಿಸರ ಮತ್ತು ಮಾಲಿನ್ಯ ನಿಯಂತ್ರಣ ಇಲಾಖೆಗೆ ಮಾನ್ಯ ಶಾಸಕರು ಪತ್ರವನ್ನು ಬರೆದಿರುತ್ತಾರೆ. ಈ ಕಾಮಗಾರಿಯನ್ನು 2018-19 ನೇ ಸಾಲಿನಲ್ಲಿ ಕೈಗೆತ್ತಿಕೊಳ್ಳಲು ಟೆಂಡರ್ ಆಧಾರದ ಮೇಲೆ ಗುತ್ತಿಗೆದಾರರಿಗೆ ವಹಿಸಲಾಗಿರುತ್ತದೆ.<br>ಪ್ರಸ್ತಾಪಿಸಿರುವ ಕಾಮಗಾರಿಯ ಸ್ಥಳವು ಈ ಹಿಂದೆ ಗೇಣಿ ಮತ್ತು ಪಹಣಿ ಪತ್ರಿಕೆ ಫಾರಂ-16 ರಂತೆ (ಆರ್.ಟಿ.ಸಿ) ಸರ್ವೆ ನಂ.18 ರಲ್ಲಿ 153 ಎಕರೆ 23 ಗುಂಟೆ ಪ್ರದೇಶವು ಗೋಮಾಳ ಪ್ರದೇಶವಾಗಿದ್ದು, ಇದರಲ್ಲಿ 5 ಎಕರೆ ಜಮೀನನ್ನು ಶ್ರೀ ಸಿ.ಕೆ.ದೇವರಾಜು ಬಿನ್ ಲೇಟ್ ಕಾಳೇಗೌಡ ಇವರಿಗೆ ದಿ: 02-08-2003 ರಿಂದ 10 ವರ್ಷಗಳ ಅವಧಿಗೆ ಗಣಿಗಾರಿಕೆಗೆ ಲೀಸ್ ಮಾಡಿಕೊಡಲಾಗಿರುತ್ತದೆ. ಸದರಿ ಗಣಿಗಾರಿಕೆ ಪ್ರದೇಶವನ್ನು ತಹಶೀಲ್ದಾರ್, ನಾಗಮಂಗಲ, ಪೋಲಿಸ್ ಇಲಾಖೆ, ಗಣಿ ಮತ್ತು ಭೂವಿಜ್ಞಾನ ಇಲಾಖೆ ಭೂ ವಿಜ್ಞಾನಿ ಮತ್ತು ಜೂನಿಯರ್ ಇಂಜಿನಿಯರ್‌ರವರುಗಳು ದಿ: 03-07-2018 ರಂದು ಜಂಟಿ ಕಾರ್ಯಾಚರಣೆ ನಡೆಸಿ ಲೈಸೆನ್ಸ್ ಇಲ್ಲದೆ ಗಣಿಗಾರಿಕೆಯನ್ನು ಅನಧಿಕೃತವಾಗಿ ಚಾಲನೆ ಮಾಡದಂತೆ ಸೀಲ್ ಮಾಡಿ ಪೋಲಿಸ್ ಇಲಾಖೆಗೆ ದಿ: 10-07-2018 ರಂದು ಪತ್ರ ಬರೆದು ತಿಳಿಸಿರುತ್ತಾರೆ. ಈ ಬಗ್ಗೆ ದಿ:20-09-2019 ರಂದು ಭೂಮಾಲೀಕರ ಮೇಲೆ ಜೆ.ಎಂ.ಎಫ್.ಸಿ. ಕೋರ್ಟ್, ನಾಗಮಂಗಲ ಇಲ್ಲಿ ಎಫ್.ಐ.ಆರ್. ದಾಖಲಾಗಿರುತ್ತದೆ. ಅಂದಿನಿಂದ ಗಣಿಗಾರಿಕೆಯನ್ನು ಸ್ಥಗಿತಗೊಳಿಸಲಾಗಿರುತ್ತದೆ. ಆದ್ದರಿಂದ ಪ್ರಸ್ತಾವಿತ ಸ್ಥಳದಲ್ಲಿ ಚೆಕ್‌ಡ್ಯಾಂ ನಿರ್ಮಾಣಕ್ಕೆ ಗಣಿಗಾರಿಕೆಯಿಂದ ಯಾವುದೇ ರೀತಿಯ ಹಾನಿಯಾಗುವುದಿಲ್ಲ. ಆದುದರಿಂದ ಕಾಮಗಾರಿಯ ಸ್ಥಳ ಆಯ್ಕೆ ಮಾಡಿರುವ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವ ಪ್ರಶ್ನೆ ಉದ್ಭವಿಸುವುದಿಲ್ಲ. |

ಸಂಖ್ಯೆ: **MID/ 66 /LCQ/2020(E)**

(ಜೆ.ಸಿ. ಮಾಧುಸ್ವಾಮಿ,)
ಕಾನೂನು, ಸಂಸದೀಯ ವ್ಯವಹಾರಗಳು,
ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.